## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಗ್ರಾಅಪ 282 ಸೇಶಿಕಾ 2016, ಬೆಂಗಳೂರು, ದಿನಾಂಕ. 07.11.2016.**

**ವಿಷಯ :–** ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ: 01.10.2016ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ:–**

1. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 19 ಜಿಪಅ 2015 ದಿನಾಂಕ 24.03.2015
2. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 121 ಸೇಶಿಕಾ 2015 ದಿನಾಂಕ 14.07.2015
3. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 291 ಸೇಶಿಕಾ 2015 ದಿನಾಂಕ 30.10. 2015
4. ಸರ್ಕಾರದ ಅಧಿಸೂಚನೆ ಸಂಖ್ಯೆ ಗ್ರಾಅಪ 183 ಸೇಶಿಕಾ 2015 ದಿನಾಂಕ 19.09.2015

ಉಲ್ಲೇಖ (1) ಮತ್ತು (2)ರ ಅಧಿಸೂಚನೆಗಳಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸಹಾಯಕ ಇಂಜಿನಿಯರ್ ಅಂತಿಮ ಜೇಷ್ಠತಾ ಪಟ್ಟಿಗಳನ್ನು ದಿನಾಂಕ 01.01.2015 ಮತ್ತು 01.06.2015 ರಲ್ಲಿದ್ದಂತೆ ಪ್ರಕಟಿಸಲಾಗಿದೆ. ಉಲ್ಲೇಖ (3)ರ ಅಧಿಸೂಚನೆಯಲ್ಲಿ ಶ್ರೀ ಬಿ.ಜೆ.ಭಾಸ್ಕರ್, ಸಹಾಯಕ ಇಂಜಿನಿಯರ್ ಇವರ ಹೆಸರನ್ನು ಸಹಾಯಕ ಇಂಜಿನಿಯರ್ ವೃಂದದ ಕ್ರಮ ಸಂಖ್ಯೆ 9(ಎ) ರಲ್ಲಿ ಜೇಷ್ಠತೆಯನ್ನು ನಿಗಧಿಪಡಿಸಲಾಗಿದೆ. ಉಲ್ಲೇಖ (4)ರ ಅಧಿಸೂಚನೆಯಲ್ಲಿ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್‌ಗಳಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ವೃಂದಕ್ಕೆ ಮುಂಬಡ್ತಿಯನ್ನು ನೀಡಲಾಗಿದೆ.

ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ನಿಯಮ 2(2)ರಲ್ಲಿನ ಅವಕಾಶದನ್ವಯ ಇನ್ನು ಮುಂದೆ ಲೋಕೋಪಯೋಗಿ ಇಲಾಖೆಯ ಸೇವೆಗೆ ಸೇರಿದ ಅಧಿಕಾರಿಗಳು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸೇವೆಯಲ್ಲಿ ವಿಲೀನಾತಿ ಹೊಂದಿದಲ್ಲಿ ಅವರ ಸೇವಾ ಅಂತರ್ ಜೇಷ್ಠತೆಯನ್ನು ಲೋಕೋಪಯೋಗಿ ಇಲಾಖೆಯಲ್ಲಿನ ಜೇಷ್ಠತೆಯನ್ನು ಆಧರಿಸಿ ಕಾಪಾಡಲಾಗುವುದು.

ಆದ್ದರಿಂದ, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಸಹಾಯಕ ಇಂಜಿನಿಯರ್‌ಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ದಿನಾಂಕ 01.10.2016ರಲ್ಲಿದ್ದಂತೆ ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪ್ರಕಟಿಸಲಾಗಿದೆ.

ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯಿಂದ ಬಾಧಿತರಾಗುವವರು ಆಕ್ಷೇಪಣೆ/ ಸಲಹೆ ಏನಾದರೂ ಇದ್ದಲ್ಲಿ ಅಂತಹ ಸಲಹೆ/ಆಕ್ಷೇಪಣೆಗಳನ್ನು ಈ ಅಧಿಸೂಚನೆ ರಾಜ್ಯಪತ್ರದಲ್ಲಿ ಪ್ರಕಟಿಸಿದ 15 ದಿವಸಗಳೊಳಗಾಗಿ ಸೂಕ್ತ ದಾಖಲೆಗಳೊಂದಿಗೆ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, 3ನೇ ಮಹಡಿ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು ಇವರಿಗೆ ಸಲ್ಲಿಸತಕ್ಕದ್ದು. ನಿಗಧಿತ ಅವಧಿಯಲ್ಲಿ ಸದವೀಕೃತವಾಗುವ ಆಕ್ಷೇಪಣೆ / ಸಲಹೆಗಳನ್ನು ನಿಯಮಾನುಸಾರ ಪರಿಗಣಿಸಿ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಕ್ರಮವಹಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ದೇಶ್ ಪೊತಲಕಟ್ಟಿ,**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಅಧಿಸೂಚನೆ ಸಂಖ್ಯೆ ಗ್ರಾಅಪ 282 ಸೇಶಿಕಾ 2016, ದಿನಾಂಕ 07.11.2016ಕ್ಕೆ ಅನುಬಂಧ**

**ದಿನಾಂಕ 01.10.2016 ರಲ್ಲಿದ್ದಂತೆ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಸಹಾಯಕ ಇಂಜಿನಿಯರ್ (ಗ್ರೂಪ್-ಬಿ) ವೃಂದದ ಕರಡು ಜೇಷ್ಠತಾ ಪಟ್ಟಿ**

| ಕ್ರ. ಸಂ. | ಲೋ.ಇ.ಯು ಪ್ರಕಟಿಸಿರುವ ಸ.ಇಂ. / ಸ.ಇಂ.-2ವೃಂದದ ಅಂತಿಮ ಜೇಷ್ಠತಾ ಪಟ್ಟಿಯಲ್ಲಿನ ಅಂತರ್ ಜ್ಯೇಷ್ಠತಾ ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀಯುತರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಸ.ಇಂ. ವೃಂದದಲ್ಲಿನ ಅರ್ಹತಾ ದಿನಾಂಕ | ಷರಾ |
|---|---|---|---|---|---|---|
| **1.** | 3667 | ಎಲ್. ಶ್ರೀಕಂಠಯ್ಯ | 04.12.1962 | 30.01.1988 | 30.01.1998 | ಸ.ಇಂ. ವೃಂದದಿಂದ ಸ.ಕಾ.ಇಂ. ವೃಂದಕ್ಕೆ ಮುಂಬಡ್ತಿ ನೀಡುವ ಸಂದರ್ಭದಲ್ಲಿ ಇವರ ಹೆಸರನ್ನು ಪರಿಗಣಿಸಲಾಗಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇರುವುದರಿಂದ ಇವರ ಹೆಸರನ್ನು ಮುಚ್ಚಿದ ಲಕೋಟೆಯಲ್ಲಿ ಇರಿಸಲಾಗಿದೆ. ಹಾಗಾಗಿ ಸ.ಇಂ. ವೃಂದದಲ್ಲಿ ಮುಂದುವರೆದಿದ್ದಾರೆ. |
| **2.** | 4580 | ಬಿ.ಜಿ.ಭಾಸ್ಕರ್ (ಎಸ್.ಸಿ) | 20.08.1962 | 01.09.2003 | 24.05.2005 | ಅಧಿಸೂಚನೆ ಸಂಖ್ಯೆ ಗ್ರಾಅಪ 310 ಜಿಪಅ 2013, ದಿನಾಂಕ 7.10.2013ರಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಸದರಿಯವರು ಗ್ರಾ.ಅ.ಪಂ.ರಾಜ್ ಇಲಾಖೆಯಲ್ಲಿ ವರದಿ ಮಾಡಿಕೊಂಡಿದ್ದಾರೆ. |
| **3.** | 2897 | ಪಾಲ್‌ವಿನ್ಸೆಂಟ್ ಸಿ. (ಡಿಪ್ಲೋಮಾ ಇಂಜಿನಿಯರಿಂಗ್ ವಿದ್ಯಾರ್ಹತೆ) | 28.03.1962 | 14.07.1983 | 25.09.2001 | ಅಧಿಸೂಚನೆ ಸಂಖ್ಯೆ ಗ್ರಾಅಪ 310 ಜಿಪಅ 2013, ದಿನಾಂಕ 07.10.2013ರಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಅದರಂತೆ ಸದರಿಯವರು ಗ್ರಾ.ಅ.ಪಂ.ರಾಜ್ ಕಾರ್ಯ ವರದಿ ಮಾಡಿಕೊಂಡಿದ್ದಾರೆ. |
| **4.** | 4134 | ಸುರೇಶ್ ಗೋವಿಂದ ನಾಯ್ಕ (ಡಿಪ್ಲೋಮಾ ಇಂಜಿನಿಯರಿಂಗ್ ವಿದ್ಯಾರ್ಹತೆ) | 03.01.1964 | 29.09.1994 | 07.02.2011 | ಅಧಿಸೂಚನೆ ಸಂಖ್ಯೆ ಗ್ರಾಅಪ 310 ಜಿಪಅ 2013, ದಿನಾಂಕ 07.10.2013ರಲ್ಲಿ ವಿಲೀನಗೊಳಿಸಿ ಆದೇಶಿಸಲಾಗಿದೆ. ಅದರಂತೆ ಸದರಿಯವರು ಗ್ರಾ.ಅ.ಪಂ.ರಾಜ್ ಇಲಾಖೆಯಲ್ಲಿ ಕಾರ್ಯ ವರದಿ ಮಾಡಿಕೊಂಡಿದ್ದಾರೆ. |
| **5.** | 3900 | ಪಿ.ಎಂ.ಶೆಟ್ಟಿಕೇರಿ (ಡಿಪ್ಲೋಮಾ ಇಂಜಿನಿಯರಿಂಗ್ ವಿದ್ಯಾರ್ಹತೆ) | 08.03.1964 | 04.09.1983 | 07.02.2011 | ಇವರನ್ನು ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 397 ಸೇಶಿಕಾ 2015 ದಿನಾಂಕ 19-05-2016ರಲ್ಲಿ ಸಹಾಯಕ ಇಂಜಿನಿಯರ್ ಹುದ್ದೆಯಲ್ಲಿ ಮುಂದುವರೆಸಲಾಗಿದೆ. |

**ಸಿದ್ದೇಶ್ ಪೊತಲಕಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**P.R. 836**
**SC-200**

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59.